**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 643(727) |
| ಸದಸ್ಯರ ಹೆಸರು | : | ಶ್ರೀ ಎಸ್.ಎಲ್.ಬೋಜೇಗೌಡ (ಶಿಕ್ಷಕರ ಕ್ಷೇತ್ರ). |
| ಉತ್ತರಿಸಬೇಕಾದ ದಿನಾಂಕ | : | 20.12.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಅನುದಾನಿತ ಪ್ರೌಢಶಾಲಾ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ನಿವೃತ್ತಿ, ಮರಣ ಹಾಗೂ ರಾಜೀನಾಮೆಯಿಂದ ಡಿಸೆಂಬರ್–2015ರವರೆಗೆ ಖಾಲಿಯಾಗಿರುವ ಒಟ್ಟು ಹುದ್ದೆಗಳ ಸಂಖೆ ಎಷ್ಟು; (ವಿವರ ನೀಡುವುದು) | ರಾಜ್ಯದ ಅನುದಾನಿತ ಪ್ರೌಢಶಾಲಾ ಮತ್ತು ಪದವಿ ಪೂರ್ವ ಕಾಲೇಜುಗಳಲ್ಲಿ ನಿವೃತ್ತಿ, ಮರಣ ಹಾಗೂ ರಾಜೀನಾಮೆಯಿಂದ ಡಿಸೆಂಬರ್–2015ರವರೆಗೆ ಖಾಲಿಯಾಗಿರುವ ಒಟ್ಟು ಹುದ್ದೆಗಳ ವಿವರ ಈ ಕೆಳಕಂಡಂತಿದೆ.<br>ಅನುದಾನಿತ ಪದವಿ ಪೂರ್ವ ಕಾಲೇಜು: **1326**<br>ಅನುದಾನಿತ ಪ್ರೌಢಶಾಲೆ: **3633** |
| ಆ | ಸದರಿ ಅವಧಿಯಲ್ಲಿ ಖಾಲಿ ಇರುವ ಎಲ್ಲಾ ಹುದ್ದೆಗಳಿಗೂ ನೇಮಕ ಮಾಡಿಕೊಳ್ಳಲು ಅನುಮತಿ ನೀಡದೆ ಕೆಲವೇ ಹುದ್ದೆಗಳಿಗೆ ಅನುಮೋದನೆ ನೀಡಿ ಆದೇಶ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ | ಡಿಸೆಂಬರ್–2015ರವರೆಗೆ ನಿವೃತ್ತಿ, ಮರಣ ಹಾಗೂ ರಾಜೀನಾಮೆಯಿಂದ ಖಾಲಿ ಆಗಿರುವ ಎಲ್ಲಾ ಖಾಲಿ ಇರುವ ಹುದ್ದೆಗಳನ್ನು ತುಂಬಲು ಯಾವಾಗ ಅನುಮತಿ ನೀಡಲಾಗುತ್ತದೆ; ಸದರಿ ಖಾಲಿ ಹುದ್ದೆಗಳನ್ನು ತುಂಬಲು ಯಾವ ಕಾಲಮಿತಿಯಲ್ಲಿ ಅನುಮತಿ ನೀಡಲಾಗುತ್ತದೆ? | **ಪದವಿ ಪೂರ್ವ ಶಿಕ್ಷಣ:–**<br>ದಿನಾಂಕ:31.12.2015ರ ಪೂರ್ವದಲ್ಲಿ ನಿವೃತ್ತಿ, ನಿಧನ ಮತ್ತು ರಾಜೀನಾಮೆ ಇನ್ನಿತರೆ ಕಾರಣಗಳಿಂದಾಗಿ ಖಾಲಿಯಾಗಿರುವ 1326 ಹುದ್ದೆಗಳ ಪೈಕಿ ನಿಗಧಿತ ಕಾರ್ಯಭಾರ ಹೊಂದಿರುವ 998 ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಲಾಗಿದೆ. ಬಾಕಿ ಉಳಿದ ಹುದ್ದೆಗಳಿಗೆ ನಿಗಧಿತ ಕಾರ್ಯಭಾರ ಲಭ್ಯವಾದಲ್ಲಿ ಅನುಮತಿ ನೀಡುವ ಬಗ್ಗೆ ನಿಯಮಾನುಸಾರ ಪರಿಶೀಲಿಸಲಾಗುವುದು.<br>**ಪ್ರೌಢ ಶಿಕ್ಷಣ:–**<br>ದಿನಾಂಕ:31.12.2015ರ ಪೂರ್ವದಲ್ಲಿ ನಿವೃತ್ತಿ, ನಿಧನ ಮತ್ತು ರಾಜೀನಾಮೆ ಇನ್ನಿತರೆ ಕಾರಣಗಳಿಂದಾಗಿ ಖಾಲಿಯಾಗಿರುವ 3633 ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರದ ಆದೇಶ ಸಂಖ್ಯೆ: ಇಡಿ 14 ಎಸ್ಇಪಿ 2017, ದಿನಾಂಕ: 18–07–2017 ಮತ್ತು 25–09–2018ರಲ್ಲಿ ಅನುಮತಿ ನೀಡಲಾಗಿತ್ತು. |

| | | |
|---|---|---|
| | | ಆದರೆ, ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8 2020, ದಿನಾಂಕ:10.06.2020ರಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ನಿವೃತ್ತಿ, ನಿಧನ, ರಾಜೀನಾಮೆ ಮತ್ತು ಇತರೆ ಕಾರಣಗಳಿಂದ ಖಾಲಿ ಉಂಟಾಗುವ ಹುದ್ದೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡುವಂತಿಲ್ಲ ಎಂದು ಮಿತವ್ಯಯ ಆದೇಶ ಜಾರಿ ಮಾಡಲಾಗಿದೆ.<br><br>ಸದರಿ ಮಿತವ್ಯಯ ಆದೇಶವನ್ನು ಸಡಿಲಿಸಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಮೇರೆಗೆ ಅನುದಾನಿತ ಪ್ರೌಢಶಾಲೆಗಳಲ್ಲಿ 257 ಹುದ್ದೆಗಳನ್ನು ಮಾತ್ರ ಭರ್ತಿ ಮಾಡಲು ಅನುಮತಿ ನೀಡಲಾಗಿದೆ.<br><br>ಈ ಹಿನ್ನೆಲೆಯಲ್ಲಿ, ದಿನಾಂಕ:31.12.2015ರ ಪೂರ್ವದಲ್ಲಿ ನಿವೃತ್ತಿ, ನಿಧನ ಮತ್ತು ರಾಜೀನಾಮೆ ಇನ್ನಿತರೆ ಕಾರಣಗಳಿಂದಾಗಿ ಖಾಲಿಯಿರುವ ಬಾಕಿ 1924 ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿದೆ. ಆರ್ಥಿಕ ಇಲಾಖೆಯು ಸಹಮತಿ ಪಡೆದು ಭರ್ತಿ ಮಾಡಲು ಅನುಮತಿ ನೀಡಲಾಗುವುದು. |

**ಸಂಖ್ಯೆ: ಇಪಿ 481 ಎಸ್‌ಇಎಸ್ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು